ಮದ್ಯಾಣ್ಣಕ್ಬಂದ್ಬಿಡ್ತೀವಿ. ಅಡ್ಗೆಮಾಡಿ ನಿನ್ನೂಟಾ ಇಲ್ಲೇ ಇಟ್ಬಿಟ್ಹೋಯ್ತಿನಿ. ಚಿಕ್ಕೋನು ಪರೀಕ್ಸೆ ಅತಂದ. ಮನೇಲಿ ಓದ್ಕೊಳ್ತಿರ್ಲಿ.

ನ.ಗೌಡ : ಅಂಗೇ ನನ್ಗಾಕ್ಕನೂ ಒಪ್ಸಿ ಕೈಮುಗ್ದು ಬಾ.

ಲಚ್ಮಕ್ಕ : ಅಟ್ಟೇಗೆಲ್ಲಾ ಬೇಗ ಅಕ್ಕೊಂಡೋಯ್ತೀನಿ. ಅಕ್ಕವಕ್ಕೋರೂ ಯಾರೂ ಇರಾಕಿಲ್ಲ. ಚಿಕ್ಕೋನ್ಗೆ ಏಳ್ಬಿಟ್ಹೋಗ್ತೀನಿ. ಮನ್ಯಾಗೇ ಇರು ಎಲ್ಲೂ ಓಗ್ಬೇಡಾಂತೆಂದು.

ನ.ಗೌಡ : ಅಂಗೇ ಮಾಡು ಲಚ್ಮಿ........ ( ಲಚ್ಮಕ್ಕ ಹೋಗುತ್ತಾಳೆ )

## Musical Bridge

[ ಬೀದಿಯಲ್ಲಿ ರಂಗು ಮತ್ತು ಸಿದ್ದ ]

ರಂಗು : ಏ ಸಿದ್ದ ಸಿಕ್ತೇನೊ ಒಂದಾದ್ರೂ ?

ಸಿದ್ದ : ನಿನ್ನೆಯಲ್ಲಾ ಉಡ್ಕಿ ಉಡ್ಕಿ ಸಾಕಾಗೋಯ್ತು ನಮಗ್ಬೇಕಾದಾಗ ಒಂದೂ ಕಣ್ಣಿಗೆ ಬೀಳಾಕಿಲ್ಲ. ಯಾವುದೊ ಸಣ್ಣದೊಂದು ಚೇಳು ಸಗಣಿ ಕುಪ್ಯಾಗ ಸಿಗ್ತು. ಇಡಿಯೋವಾಗ ಅದರ ಕೊಂಡಿ ಮುರ್ದೋಯ್ತು.

ರಂಗು : ಒಳ್ಳೆದಾಯ್ತೇಳು ಎಲ್ಲದು ?

ಸಿದ್ದ : ಇಗೋ ಈ ಬೆಂಕಿಪೊಟ್ನದಲ್ಲಿ. ಇಲ್ನೋಡು, ಪಾಪ ! ಮುದುರ್ಕೊಂಡು ಕುಂತೈತೆ. ( ತೋರಿಸುತ್ತಾನೆ )

ರಂಗು : ಏನೊ ಮೆದ್ಯಾಕೆ ಇಲ್ವಲ್ಲೊ. ಲೊ ಸತ್ಹೋಗೈತೊ ಪಾಪ.

ಸಿದ್ದ : ನಾನೇನ್ಮಾಡ್ಲಿ ಇನ್ನೊಂದನ್ನ ಎಲ್ಲಿ ಉಡುಕ್ಲಿ ಈಗ. ನನ್ಕೈಲಾಗೋಕಿಲ್ಲಪ್ಪ.

ರಂಗು : ಓಗ್ಲಿ ಬಿಡು ಇದ್ರಿಂದ್ಲೇ ಆಟ ಆಡಿಸ್ಬುಡೋಣ. ಆ ಮುದುಕನ್ನ.

ಸಿದ್ದ : ಅಂಗೇ ಸ್ಕೆ.

ರಂಗು : ನೋಡಪ್ಪ ಸೀನು ಯಾತರ್ದೊ ಸದ್ದಾಕ್ದ್ಬೆ ಇರ್ಬೇಕು. ನಗು ಬಂದ್ರೆ ಅಂಗೆ ಅಲ್ಕಚ್ಕೊಂಡು ತಡ್ಕೊ. ಏನಂತೀಯ ? ಈವತ್ತು ಏನಿಲ್ಲಾಂದ್ರೂ ಒಂದ್ರೂ ಪಾಯಿ ಗಿಟ್ಟಿಸ್ಬಿಡ್ತೀನಿ ಆ ಕುಲ್ಡನ ಅತ್ರ. ಲೋ ಸಿದ್ದ ಚಂಚಿ ತುಂಬ ಅಣ ಇಟ್ಕೊಂಡ್ಔನೆ ಆ ಮುದಿಯ. ಎಂಗಾರೆ ಒಡೀದ್ಬಿಡ್ಬೇಕು ಅದ್ನ ದೊಟು ರೋಟಾಗಿ. ಏ ಎಲ್ಲಾದ್ರೂ ಬಾಯ್ಚ್ ಬಿಟ್ಟೇಯೋ. ಕತ್ತು ಮುರ್ದಾಕ್ಬಿಡ್ತೀನಿ. ನಿನ್ಗೆ ನೋಡ್ಕೊ.

ಸಿದ್ದ : ನಾನ್ಯಾಕೇಳ್ಲಿ ? ನಾ ಯೆಳೋನಲ್ಲ .

ರಂಗು : ಸದ್ದಿಲ್ದೆ ಬಾ ನನ್ಜೊತೇಲಿ. ಒಳ್ಳೆ ಒಂದು ನಾಟ್ಕ ತೋರಿಸ್ತೀನಿ ನಿಂಗೆ. (ನಿಷ್ಕ್ರಮಿಸುವರು)

Musical Bridge

[ ಮಧ್ಯಾಹ್ನದ ವೇಳೆ. ನ. ಗೌಡ ಊಟ ಮುಗಿಸಿ ಕುರ್ಚಿಯಲ್ಲಿ ಕುಳಿತಿದ್ದಾನೆ. ರಂಗನೂ ಸಿದ್ದನೂ ಮೆಲ್ಲಗೆ ಬರುತ್ತಾರೆ. ]

ರಂಗು : ( ಪಿಸು ಮಾತಿನಲ್ಲಿ ) ಲೇ ಸಿದ್ದ ನೀ ಬಾಕ್ಲತ್ಲೇ ನಿಂತಿರು ತಮಾಷೆ ನೋಡ್ತ. ಒಳಕ್ಕೆ ಬರ್ಬೇಡ. ಸದ್ದು ಮಾಡಬ್ಯಾಡ ತಿಳೀತೆ ?

ಸಿದ್ದ : ಅಂಗೇ ಆಗ್ಲಿ. ಇಲ್ಲೇ ನಿಂತಿರ್ತೀನಿ.

ರಂಗು : ( ಒಳಗೆ ಬಂದು ದೊಡ್ಡ ಧ್ವನಿಯಲ್ಲಿ ) ಉಂಡೇನಜ್ಜಾ ? ಎಲೆ ಅಡ್ಕೆ ಕುಟ್ಟಿ ಕೊಡ್ಲಾ ?

ನ. ಗೌಡ : ಏನೂ ಬೇಡ ಮಗಾ. ಈಟೊತ್ತೂ ಎಲ್ಹೋಗಿದ್ದೆ? ಪರೀಕ್ಸೆ ಅಂತೀಯ ಪಾಟಗಳೋದ್ಕೊಂಡು ಮನ್ಯಾಗೇ ಇರು. ಮನೇಲಿ ಯಾರೂ ಇಲ್ಲಾಂತ ಗೊತ್ತಿಲ್ವ ನಿಂಕೆ ?

ರಂಗು : ನಾನೆಲ್ಹೋಗಿದ್ದೆ ? ಇಲ್ಲೆ ಓದ್ಕೋತಾ ಇದ್ದೆ. (ಏನನ್ನೋ ಹುಡುಕುತ್ತಿರುವಂತೆ ನಟಿಸಿ ) ಅಯ್ಯಯ್ಯೋ ! ಅಜ್ಜಾ! ಇನ್ನೇನ್ಗತಿ ದೊಡ್ಡ ಕೆಂಚೇಳು ಅಜ್ಜ ಕುರ್ಚಿ ಬೆನ್ನ ಮ್ಯಾಗೆ – ಅಯ್ಯಯ್ಯೋ. ಮ್ಯಾಗೆ ಅತ್ತಾವರೆ....

ನ. ಗೌಡ : (ಬಲು ಸಿಟ್ಟಿನಿಂದ) ಓಗೊ ಅರಾಮು ! ಓಗ್ತೀಯೊ ಇಲ್ವೊ ಇಲ್ಲಿಂದ ?

ರಂಗ : ನಿಜ್ವಾಗೂ ಅಜ್ಜ ದೇವ್ರಾಣ್ಗೂ. ಅಯ್ಯಬ್ಬಾ. ಕಾಯ್ಚೇಳು ಅಜ್ಜಾ ಒಟ್ಟೆ ತುಂಬ ಮರಿ ಅವೆ.

ನ. ಗೌಡ : ಓಗ್ತೀಯೊ ಇಲ್ವೊ ? ದೈಯ್ಯ. ತಿರ್ಗ್ಗ ಚೇಸ್ಟೆ ಮಾಡ್ತೀಯಾ ?

ರಂಗು : ನಂಗೇನು, ಓಯ್ತೀನೇಳು. ಈಗ ನಿನ್ನ ಬುಜದ್‌ಮ್ಯಾಕೇ ಅತ್ಬಿಟ್ತು. ಚೇಳುಗಳ್ಗೆ ನಿನ್ನ ಮೈ ವಾಸ್ನೇಂದ್ರೆ ಬೊ ಇಸ್ಟ.

[ ಗೌಡನಿಗೆ ಈಗ ಇರಬಹುದೇನೋ ಅನ್ನಿಸಿತು. ಭುಜದ ಮೇಲೆ ಕೈಯಾಡಿಸಿ ಕೊಡವಿದ. ಅವನ ಕೈಗೆ ಏನೂ ಸಿಗಲಿಲ್ಲ. ಗೌಡ ಈಗ ಸಿಟ್ಟಿನಿಂದ ಅಬ್ಬರಿಸಿದ. — ]

ನ. ಗೌಡ : ಅಯ್— ಚಂಡಾಲ. ದೇವ್ರು ನನ್ನ ಕಣ್ಣುಗಳ್ನಾನ ಉಳಿಸಿದ್ರೆ ಈಗ ನಿನ್ನ ಸಿಗಿದು ತ್ವಾರಣ ಕಟ್ಬಿಡ್ತಿದ್ದೆ. ಬರೋ ಪಾಪ ಬರ್ಲೀಂತ.

[ರಂಗು ಸಿದ್ದನನ್ನು ನೋಡಿ ಹಲ್ಲು ಕಿರಿದ. ಸಿದ್ದನೂ ಹಲ್ಲು ಕಿರಿದ. ರಂಗು ಚಿಂಕಿ ಪೊಟ್ಣದಲ್ಲಿಟ್ಟುಕೊಂಡಿದ್ದ ಸತ್ತ ಚೇಳನ್ನು ಗೌಡನ ಎಡಗೈ ಮೇಲ್ಭಾಗದಲ್ಲಿ ಕೆಡವಿದ. ರಂಗು ಗಟ್ಟಿಯಾಗಿ ಕೂಗಿ ಹೇಳಿದ —]

ರಂಗು : ಅಯ್ಯಯ್ಯೋ ನೋಡಜ್ಜ. ನಾನು ಸುಳ್ಳೇಳ್ತೀನೇನೊ. ಈಗ ನಿನ್ನ ಕೈಮ್ಯಾಕೇ ಬಂದ್ಬಿಡ್ತು. ಮುಟ್ಬೇಡ ಅಜ್ಜ ಕಚ್ಚಿಬಿಟ್ಟೀತು.

[ ಹುಡುಗರಿಬ್ಬರಿಗೂ ನಗು ಉಕ್ಕಿಬಂತು. ತಡೆಯಲಾರದೆ 'ಪಿಸಪಿಸನೆ' ಸ್ವಲ್ಪ ನಕ್ಕರು. ಆ ನಗು ಗೌಡನ ಕಿವಿಯನ್ನು ಸೋಕದೆ ಹೋಗಲಿಲ್ಲ. ಗೌಡ ತನ್ನಬಲಗೈಯ ಒಂದು ಪೆಟ್ಟಿನಿಂದ ಎಡಗೈ ಮೇಲೆ ಬಿದ್ದಿದ್ದ ಸತ್ತ ಚೇಳನ್ನು ಜಜ್ಜಿ ಕೈಯನ್ನು ಒದರಿ, ಗೌಡನ ಹೃದಯವನ್ನೇ ಈಗ ಚೇಳು ಕುಟುಕಿದಂತಾಯಿತು. ಗೌಡ ಸಿಟ್ಟಿನಿಂದ 'ಥರಥರ' ಕಂಪಿಸಿ ಹೋದ. ಸರ್ರನೆ ಎದ್ದು ಬಾಕಲ ಕಡೆಗೆ ಹೋದ. ಅಲ್ಲಿ ನಿಂತಿದ್ದ ಸಿದ್ದ ಓಡಿ ಹೋದ. ಒಳಗೆ ಇದ್ದ ರಂಗ ಹೊರಗೆ ಹೋಗದಂತೆ ಗೌಡ ಬಾಗಿಲನ್ನು ಮುಚ್ಚಿ ಮೇಲ್ಗಡೆ ಮಾಸ್ಕಾಲ ನೆತ್ತಿಗೆ ಹಾಕಿದ್ದ ಕೊಂಡಿಗೆ ಬಾಗಿಲಚಿಲಕವನ್ನು ಸಿಕ್ಕಿಸಿಬಿಟ್ಟ. ಆ ಚಿಲಕವು ಎತ್ತರದಲ್ಲಿದ್ದುದರಿಂದ ರಂಗುವಿಗೆ ಎಟುಕುತ್ತಿರಲಿಲ್ಲ. ರಂಗುವು ಈಗ ಆ ಕೋಣೆಯಲ್ಲಿ ಬಂದಿಯಾದ. ಗೌಡನು ದಪ್ಪವಾದ ತನ್ನ ಬಿದಿರು ಡೊಣ್ಣೆಯನ್ನು ಬಲವಾಗಿ ಬೀಸುತ್ತ, ಭಯಂಕರವಾಗಿ ಅಬ್ಬರಿಸುತ್ತ, ಡೊಣ್ಣೆಯನ್ನು ಬೀಸಿ ಬೀಸಿ ಹೊಡೆಯುತ್ತ ಎಡವಿ ಬೀಳುವುದನ್ನೂ ಲೆಕ್ಕಿಸದೆ, ಉನ್ಮತ್ತನಂತೆ ಕೋಣೆಯೆಲ್ಲೆಲ್ಲಾ ಓಡಾಡಿದ. ಪಾತ್ರೆ ಪದಾರ್ಥಗಳು ಸಾಮಾನುಗಳು ಎಲ್ಲವೂ ಉರುಳಿ, ಒಡೆದು ಹೋದವು. ಗೌಡನಿಗೆ ಬಿದ್ದು ಎದ್ದು ನಾಲ್ಕಾರು ಕಡೆ ಘಾಯಗಳಾದುವು. ರಂಗುವು ತನ್ನ ದುಸ್ಥಿತಿಯನ್ನೀಗ ಅರಿತ. ಮೈಗೆ ಬೆಂಕಿ ಹತ್ತಿದವನಂತೆ ಚೀರುತ್ತ ಕೋಣೆಯಲ್ಲೆಲ್ಲಾ ಚೀರುತ್ತ ಓಡಾಡಿದ. ಗೌಡನು ಚೀರಿದ ಕಡೆಗೆ ಧಾವಿಸಿ ಡೊಣ್ಣೆಯನ್ನು ಬೀಸಿ ಹೊಡಿಯುತ್ತ ಬಂದ. ಗೌಡನ ಕೋಪ ಅತಿ ರೌದ್ರಕ್ಕೆ ಏರಿತ್ತು. ರಂಗುವು 'ಅಯ್ಯೋ...ಅಯ್ಯೋ...ಅಯ್ಯಯ್ಯೋ...' ಎಂದು ಕೂಗುತ್ತ, ಬೀಸಿ ಬರುತ್ತಿರುವ ಏಟುಗಳನ್ನು ಜಿಂಕೆಯಂತೆ ನೆಗೆದು ನಿವಾರಿಸಿಕೊಳ್ಳುತ್ತ ಬಾಗಿಲ ಚಿಲಕವನ್ನು ಎಟುಕಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಈ ಶಬ್ದ ಈ ಆರ್ಭಟಗಳನ್ನು ಕೇಳಿ ಹೊರಗಿನವರು ಬಂದು ಬಾಗಿಲನ್ನು 'ಧಿಮಿಧಿಮಿ' ಗುದ್ದಿ ಕೂಗುತ್ತಾರೆ. 'ಯಾರ್ರಿ ಒಳಗೆ-ಯಾರ್ರೀ-ಬಾಗಿಲು ತೆಗೆಯಿರಿ. ಯಾಕ್ರೀ-ಯಾರನ್ರೀ ಹಾಗೆ ಕೊಲ್ತಿದ್ದೀರ್ರಾ ತೆಗೀರಿ ಬಾಗಿಲು ತೆಗೀರಿ' ಎಂದು ಬಾಗಿಲನ್ನು ತೆಗೆಯಿಸಲು ಪ್ರಯತ್ನಪಡುತ್ತಾರೆ. ರಂಗುವು ಓಡಿಬಂದು ಚಿಲುಕವನ್ನು ಎಟುಕಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಗೌಡನು ಚಿಲುಕದ ಶಬ್ದವನ್ನು ಕೇಳಿ ಆ ಕಡೆಗೆ ಧಾವಿಸಿ ಡೊಣ್ಣೆಯನ್ನು ಬಾಗಿಲಿಗೆ ಬೀಸಿ ಹೊಡೆಯುತ್ತಾನೆ. ಒಂದುಸಲ ರಂಗುವು ಚಿಲುಕವನ್ನು ಎಟುಕಿಸಿಕೊಳ್ಳುತ್ತಾನೆ. ಅ ಕ್ಷಣವೇ ಗೌಡನ ಡೊಣ್ಣೆಯ ಪೆಟ್ಟು ರಂಗುವಿಗೆ ತೊಡೆಗೆ ಬಲವಾಗಿ ತಾಗಿ ರಂಗುವಿನ ತೊಡೆಎಲುಬು ಮುರಿಯುತ್ತದೆ. ರಂಗುವು ಆ ಪೆಟ್ಟಿಗೆ ಆಯ್ಯೋ ಅಜ್ಜ-ನಾ-ಸತ್ತೆ ಸತ್ತೆ-ನಾ-ಸತ್ತೆ ಎಂದು ದೊಪ್ಪನೆ ಬೀಳುತ್ತಾನೆ. ಆಗಲೆ ಹೊರಗಿನ ಜನರು ಬಾಗಿಲನ್ನು ತೆರೆದುಕೊಂಡು ಒಳಕ್ಕೆ ಪ್ರವೇಶಿಸುತ್ತಾರೆ. ಗೌಡನು ರಂಗುವಿಗೆ ಆ ದೈನ್ಯ ಧ್ವನಿಯನ್ನು ಕೇಳಿ ತಾನು ಮುಮ್ಮಗನ ತಲೆಯನ್ನೇ ಒಡೆದುಬಿಟ್ಟೆನೆಂಬ ಅನುಭವವಾಗುತ್ತದೆ...ಗೌಡನು "ಅಯ್ಯೋ...ಮಗಾ...ಮಗಾ...ಮಗಾ..." ಎಂದು ಕೂಗುತ್ತಾ ತಾನು ಕೆಳಗೆ ಬಿದ್ದು ಬಿಡುತ್ತಾನೆ. ದೊಣ್ಣೆ ಅವನ ಕೈಯಿಂದ ಜಾರಿ ಹೋಗುತ್ತದೆ. ಗೌಡನ ಬಾಯಲ್ಲಿ ಮೂಗಿನಲ್ಲಿ ನೆತ್ತರ ಹೊರಟು ಗೌಡ ಸಾಯುತ್ತಾನೆ].

ಒಬ್ಬ ಪೌರ : ಅಯ್ಯೋ–ಓಯ್ಯು–ಓಯ್ಯು. ದೊಡ್ಡ ಪರಾಣ. ಹೃದ್ಯ ಒಡೆದ್ಹೋಯ್ತು. ಈ ಕಣ್ಣಿಲ್ದ ಮುದ್ಕನಿಗೆ ಈ ಗತಿ ಬರ್ಬೇಕೆ. ಉಡುಗನ್ಗೆ ತೊಡೇಗೆ ಏಟು ಬಿದ್ದದೆ. ಅವನು ನಿಂತ್ಕೊಳ್ಳಾರ.

ಇನ್ನೊಬ್ಬ : (ಹುಡುಗನನ್ನು ಎಬ್ಬಿಸಿ ನಿಲ್ಲಿಸುವುದಕ್ಕೆ ಹೋಗಿ ತೊಡೆಯೆಲುಬು ಮುರಿದು ಹೋಗಿರುವುದನ್ನು ಕಾಣುತ್ತಾನೆ.) ನಿಂತ್ಕೊ ಮಗ ನಿಂತ್ಕೊ [illegible].

ರಂಗು : ಅಯ್ಯೋ–ನಾ ನಿಲ್ಲಲಾರೆ–ನಿಲ್ಲಾರೆ–ನನ್ತೊಡೆ ಮುರ್ದೋಯ್ತು. ನಾ ಸತ್ತೆ.... ಅಯ್ಯೋ ನಾ ಸತ್ತೆ. (ಆಗ ಲಚ್ಮಕ್ಕ, ಲಚ್ಮಕ್ಕನ ಗಂಡ ಇಬ್ಬರೂ ಜಾತ್ರೆಯಿಂದ ಬಂದವರು ಪ್ರವೇಶಿಸುತ್ತಾರೆ.)

ಒಬ್ಬ : ಅಯ್ಯೋ ಲಚ್ಮಕ್ಕ, ಎಲ್ಹೋಗಿದ್ದೆ ಅವ್ವಾ ನೀನು? ಗೌಡ್ರು ಸತ್ಹೋದ್ರು, ಮೊಗ್ಗ ತೊಡೆ ಮುರೀತು. ಏನೇನಾಯ್ತೋ! ಶಿವನ್ಗೆ ಬೆಳಕು.

ಲಚ್ಮಕ್ಕ: ಅಯ್ಯೋ ಅಪ್ಪಾ, ಅಪ್ಪಾ ಇಂಗೊಗ್ಬೇಕೇ ನಿನ್ಜೀವ. ಮಗಾ-ಮಗಾ- ಏನ್ಮಾಡ್ಬಿಟ್ಟೆ–ಏನ್ಮಾಡ್ಬಿಟ್ಟೆ.

[ ಮೂರ್ಛೆ ಬೀಳುತ್ತಾಳೆ. ]